2007-08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ, ಕರ್ನಾಟಕ ಸರ್ಕಾರವು ಡಿಇಡಿ ಕೋರ್ಸ್‌ಗೆ ಸಂಬಂಧಿಸಿದಂತೆ ವಾರ್ಷಿಕ ಶುಲ್ಕ ದರಗಳನ್ನು ಈ ಕೆಳಕಂಡ ಪಟ್ಟಿ-1 ಮತ್ತು ಪಟ್ಟಿ-2ರಲ್ಲಿ ನಮೂದಿಸಿದಂತೆ ಪರಿಷ್ಕರಿಸಿ ಈ ಮೂಲಕ ನಿಗದಿಪಡಿಸಿದೆ:

**ಪಟ್ಟಿ-1**

**ಸರ್ಕಾರಿ ಅನುದಾನಿತ ಹಾಗೂ ಅನುದಾನ ರಹಿತ ಶಿಕ್ಷಣ ತರಬೇತಿ ಸಂಸ್ಥೆಗಳ ಡಿಇಡಿ ಕೋರ್ಸ್ ಶುಲ್ಕಗಳ ವಿವರ**

| ಸೀಟುಗಳ ವರ್ಗೀಕರಣ | | | | | | | | | |
|---|---|---|---|---|---|---|---|---|---|
| | | ಸರ್ಕಾರಿ ಕೋಟಾ | | | | ಆಡಳಿತ ಮಂಡಳಿ ಕೋಟಾ | | | |
| ಕ್ರ. ಸಂ. | ಸಂಸ್ಥೆ | ಬೋಧಾ ಶುಲ್ಕ (ರೂ.ಗಳಲ್ಲಿ) | ಅಭಿವೃದ್ಧಿ ಶುಲ್ಕ (ರೂ.ಗಳಲ್ಲಿ) | ಇತರೆ ಶುಲ್ಕಗಳು (ಟೇಬಲ್-2 ರಂತೆ ರೂ.ಗಳಲ್ಲಿ) | ಒಟ್ಟು (ರೂ. ಗಳಲ್ಲಿ) | ಬೋಧನಾ ಶುಲ್ಕ (ರೂ.ಗಳಲ್ಲಿ) | ಅಭಿವೃದ್ಧಿ ಶುಲ್ಕಗಳು (ರೂ.ಗಳಲ್ಲಿ) | ಇತರೆ ಶುಲ್ಕಗಳು (ಟೇಬಲ್-2 ರಂತೆ) (ರೂ.ಗಳಲ್ಲಿ) | ಒಟ್ಟು (ರೂ. ಗಳಲ್ಲಿ) |
| 1 | ಸರ್ಕಾರಿ | 1000 | ಅಸ್ತಿತ್ವದಲ್ಲಿಲ್ಲ | 1925 | 2925 | ಅಸ್ತಿತ್ವದಲ್ಲಿಲ್ಲದ ಕೋಟಾ | | | |
| 2 | ಅನುದಾನಿತ | 1000 | 4000 | 1925 | 6925 | 4000 | 4000 | 1925 | 9925 |
| 3 | ಅನುದಾನ ರಹಿತ | 2000 | 8000 | 1925 | 11925 | 8000 | 8000 | 1925 | 17925 |

**ಪಟ್ಟಿ-2**

**ಪಟ್ಟಿ-1ರಲ್ಲಿ ಉಲ್ಲೇಖಿಸಲಾದ “ಇತರೆ ಶುಲ್ಕಗಳು” ದಲ್ಲಿ ಈ ಕೆಳಕಂಡ ಶುಲ್ಕಗಳು ಒಳಗೊಂಡಿವೆ.**

| ಇತರೆ ಶುಲ್ಕಗಳ ವಿಂಗಡಣೆ | | ಮೊತ್ತ (ರೂ.ಗಳಲ್ಲಿ) |
|---|---|---|
| 1) | ದಾಖಲಾತಿ ಶುಲ್ಕ | 100.00 |
| 2) | ವಾಚನಾಲಯ ಶುಲ್ಕ | 200.00 |
| 3) | ಕ್ರೀಡಾ ಶುಲ್ಕ | 100.00 |
| 4) | ಪ್ರಯೋಗಾಲಯ ಶುಲ್ಕ | 200.00 |
| 5) | ಕಲೆ ಮತ್ತು ಚಿತ್ರಕಲೆ ಶುಲ್ಕ | 100.00 |
| 6) | ಸಾಮಾಜಿಕ ಉಪಯುಕ್ತ ಉತ್ಪನ್ನ ಕಮ್ಮಟ | 100.00 |
| 7) | ದೃಶ್ಯ ಶ್ರವಣ ಮನರಂಜನೆ | 100.00 |
| 8) | ವಿದ್ಯಾರ್ಥಿ ಅಭಿವೃದ್ಧಿ ನಿಧಿ | 25.00 |
| 9) | ಶಿಕ್ಷಕರ ಕಲ್ಯಾಣ ನಿಧಿ | 25.00 |
| 10) | ಪರೀಕ್ಷಾ ಶುಲ್ಕ | 100.00 |
| 11) | ಸಂಘದ ಶುಲ್ಕ | 100.00 |
| 12) | ಸಿಟಿಜನ್ ಶುಲ್ಕ | 200.00 |
| 13) | ಶೈಕ್ಷಣಿಕ ಪ್ರವಾಸ ಶುಲ್ಕ | - |
| 14) | ವೈದ್ಯಕೀಯ ಪರೀಕ್ಷಾ ಶುಲ್ಕ | 25.00 |
| 15) | ಪತ್ರಿಕಾ ಶುಲ್ಕ (ಮಾಗಜಿನ್) | 50.00 |
| 16) | ಗ್ರಂಥಾಲಯ ಶುಲ್ಕ | 200.00 |
| 17) | ಪರಿಕರಗಳ ನಿರ್ವಹಣಾ ಶುಲ್ಕ | 300.00 |
| | **ಒಟ್ಟು** | **1,925.00** |

2. ಮೇಲೆ ನಿಗದಿಪಡಿಸಿರುವ ಶುಲ್ಕದರವನ್ನು ಹೊರತುಪಡಿಸಿ ಸಂಬಂಧಿಸಿದ ಸಂಸ್ಥೆಗಳು ಯಾವುದೇ ಶುಲ್ಕವನ್ನು ವಿಧಿಸತಕ್ಕದಲ್ಲ.

3. ಅನುದಾನಿತ ಖಾಸಗಿ ಮತ್ತು ಅನುದಾನ ರಹಿತ ಶಿಕ್ಷಣ ಸಂಸ್ಥೆಗಳು ಸದರಿ ಶುಲ್ಕದ ಮೊತ್ತವನ್ನು ಉಪಯೋಗಿಸಿಕೊಳ್ಳುವುದು ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟಿರುತ್ತದೆ:-

1) ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಸರ್ಕಾರಿ ಹಾಗೂ ಆಡಳಿತ ಮಂಡಳಿ ಕೋಟಾದ ಮೊದಲನೇ ಹಾಗೂ ಎರಡನೇ ವರ್ಷದ ಎಲ್ಲಾ ವಿದ್ಯಾರ್ಥಿಗಳಿಂದ ಸಂಗ್ರಹಿಸಲಾದ ಬೋಧನಾ ಶುಲ್ಕದ ಶೇಕಡ 50 ರಷ್ಟನ್ನು ಸರ್ಕಾರಕ್ಕೆ ಜಮೆ ಮಾಡಿ, ಉಳಿದ ಶೇಕಡ 50 ರಷ್ಟು ಹಾಗೂ ಅಭಿವೃದ್ಧಿ ಶುಲ್ಕದ ಪೂರ್ಣ ಮೊಬಲಗನ್ನು ಸಂಬಂಧಿಸಿದ ಆಡಳಿತ ಮಂಡಳಿ ಸಂಬಂಧಿಸಿದ ಶಿಕ್ಷಕರ ತರಬೇತಿ ಸಂಸ್ಥೆಗಾಗಿ ಉಪಯೋಗಿಸಿಕೊಳ್ಳುವುದು.

2) ಅನುದಾನ ರಹಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ನಿಗದಿತ ಬೋಧನಾ ಶುಲ್ಕದ ಮತ್ತು ಅಭಿವೃದ್ಧಿ ಶುಲ್ಕದ ಪೂರ್ಣ ಮೊತ್ತವನ್ನು ಸಂಬಂಧಿಸಿದ ಶಿಕ್ಷಕರ ತರಬೇತಿ ಸಂಸ್ಥೆಯ ಸಿಬ್ಬಂದಿಯ ವೇತನಕ್ಕಾಗಿ ಮತ್ತು ಅದರ ಅಭಿವೃದ್ಧಿ ಕಾರ್ಯಕ್ಕಾಗಿ ಉಪಯೋಗಿಸಿಕೊಳ್ಳುವುದು.

3) ಮೇಲಿನ ಶುಲ್ಕವನ್ನು ಸಂಬಂಧಿಸಿದ ಶಿಕ್ಷಕರ ತರಬೇತಿ ಸಂಸ್ಥೆಗಾಗಿ ಆಯಾ ಆಡಳಿತ ಮಂಡಳಿ ಉಪಯೋಗಿಸಿಕೊಳ್ಳಲು ಇಲಾಖೆಯ ಅನುಮತಿ ಬೇಕಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಶಿಕ್ಷಣ ಇಲಾಖೆ.

ಪಿ.ಆರ್. 725

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಆಕುಕ 466 ಹೆಚ್‌ಎಸ್‌ಹೆಚ್ 2006, ಬೆಂಗಳೂರು, ದಿನಾಂಕ: 26ನೇ ಮೇ 2007**

ಡಾ: ಯೋಗೇಶ್ ಗೌಡ, ವೈದ್ಯಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಸೇವೆಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 64 ಹೆಚ್‌ಎಸ್‌ಹೆಚ್ 2006 ದಿನಾಂಕ: 27.02.2006 ರಲ್ಲಿ ಬೆಂಗಳೂರು ಮಹಾನಗರಪಾಲಿಕೆಗೆ ನಿಯೋಜಿಸಲಾಗಿತ್ತು. ತದನಂತರ, ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 466 ಹೆಚ್‌ಎಸ್‌ಹೆಚ್ 2006 ದಿನಾಂಕ: 05.08.2006 ರಲ್ಲಿ ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯಿಂದ ವಾಪಸ್ಸು ಪಡೆದು ಪ್ರಾಥಮಿಕ ಆರೋಗ್ಯ ಘಟಕ, ಗುಡ್ಡಹಟ್ಟಿ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ ಇಲ್ಲಿಗೆ ನೇಮಿಸಲಾಗಿತ್ತು. ಆದರೆ ಸದರಿ ವೈದ್ಯರು ವರ್ಗಾಯಿಸಲಾದ ಸ್ಥಳಕ್ಕೆ ಹಾಜರಾಗಿರುವುದಿಲ್ಲ. ನಂತರ, ನಗರಾಭಿವೃದ್ಧಿ ಇಲಾಖೆಯು ಈ ವೈದ್ಯರನ್ನು ಮೈಸೂರು ಮಹಾನಗರಪಾಲಿಕೆಗೆ ವರ್ಗಾಯಿಸಿತ್ತು, ಈ ವೈದ್ಯರು ಮೈಸೂರು ಮಹಾನಗರಪಾಲಿಕೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗುವುದು, ಸ್ವಚ್ಛತಾ ಕಾರ್ಯವನ್ನು ನಿರ್ವಹಿಸದೇ ಇರುವುದು, ವಾರದಲ್ಲಿ ಯಾವುದೋ ಒಂದು ದಿನ ಹಾಜರಾತಿ ಹಾಕುವುದು, ಕಾರಣ ಕೇಳುವ ನೋಟೀಸಿಗೆ ಉತ್ತರವನ್ನು ನೀಡದೆ ಉದ್ಧಟತನದಿಂದ ವರ್ತಿಸುವುದು ಈ ರೀತಿ ಅನೇಕ ಅಸಮರ್ಪಕ ಕರ್ತವ್ಯ ನಿರ್ವಹಣೆ ಬಗ್ಗೆ ಸರ್ಕಾರದಲ್ಲಿ ವರದಿ ಸ್ವೀಕೃತವಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 466 ಹೆಚ್‌ಎಸ್‌ಹೆಚ್ 2006 ದಿನಾಂಕ: 26.12.2006 ರಲ್ಲಿ ಸದರಿಯವರ ಸೇವೆಯನ್ನು ಮೈಸೂರು ಮಹಾನಗರಪಾಲಿಕೆಯಿಂದ ಹಿಂದಕ್ಕೆ ಪಡೆಯಲಾಗಿದೆ.

ಮೇಲ್ಕಂಡ ಸರ್ಕಾರದ ಅಧಿಸೂಚನೆಯ ಹಿನ್ನೆಲೆಯಲ್ಲಿ ಮೈಸೂರು ಮಹಾನಗರಪಾಲಿಕೆಯು ದಿನಾಂಕ: 4.1.2007ರ ಅಪರಾಹ್ನ ಡಾ: ಯೋಗೇಶ್ ಗೌಡ ಇವರನ್ನು ಹುದ್ದೆಯಿಂದ ಬಿಡುಗಡೆಗೊಳಿಸಿರುವುದು ವರದಿಯಾಗಿರುತ್ತದೆ. ಆದರೆ ಈ ವೈದ್ಯರು ಈ ಆದೇಶವನ್ನು ತಿರಸ್ಕರಿಸಿ ಅದೇ ದಿನಾಂಕ ರಾತ್ರಿ ಸುಮಾರು 10.15ರ ಸಮಯದಲ್ಲಿ ಆಯುಕ್ತರು, ಮೈಸೂರು ಮಹಾನಗರಪಾಲಿಕೆ ಇವರ ನಿವಾಸಕ್ಕೆ ಅಕ್ರಮವಾಗಿ ಪ್ರವೇಶಿಸಿ ಬಿಡುಗಡೆ ಆದೇಶವನ್ನು ವಿರೋಧಿಸಿ, ಅನುಚಿತವಾಗಿ ವರ್ತಿಸಿದ್ದರ ಹಿನೆಲೆಯಲ್ಲಿ ವಿ.ವಿ.ಪುರಂ ಪೊಲೀಸ್ ಠಾಣೆ, ಮೈಸೂರು ನಗರ ಇಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುವುದು ಸರ್ಕಾರಕ್ಕೆ ವರದಿಯಾಗಿರುತ್ತದೆ.

ಅಲ್ಲದೆ, ಡಾ: ಯೋಗೇಶ್‌ಗೌಡ ಅವರು ಸ್ಥಳ ನೇಮಕಾತಿಗಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖಾ ನಿರ್ದೇಶನಾಲಯಕ್ಕೆ ಹಾಜರಾಗದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿಯಾಗಿರುವುದೂ ಸಹ ವರದಿಯಾಗಿರುತ್ತದೆ.

ಮೇಲ್ಕಂಡ ವೈದ್ಯರ ವರ್ತನೆಯು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರನ ಘನತೆಗೆ ತಕ್ಕುದಲ್ಲವಾಗಿದ್ದು ಇವರ ವಿರುದ್ಧ ಶಿಸ್ತುಕ್ರಮ ಜರುಗಿಸುವುದು ಅಗತ್ಯವಾಗಿರುವುದರಿಂದ, ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮ 1957ರ ನಿಯಮ 10(1)(d) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಯೋಗೇಶ್‌ಗೌಡ, ವೈದ್ಯಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ವೈದ್ಯರು ನಿಯಮಾನುಸಾರ ಜೀವನಾಂಶ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಲ್ಲದೆ ಸರ್ಕಾರದ ಪೂರ್ವಾನುಮತಿ ಇಲ್ಲದೆ ಆಪಾದಿತ ವೈದ್ಯರು ಕೇಂದ್ರಸ್ಥಾನವನ್ನು ಬಿಡುವಂತಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಹೆಸರಿನಲ್ಲಿ,

**ಕೆ.ಎಸ್. ಸರೋಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1)

ಪಿ.ಆರ್. 726

## ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಇವರ ನ್ಯಾಯಾಲಯ, ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು - 03

**ದಾವಾ ಅರ್ಜಿ ಸಂಖ್ಯೆ:ಡಿಆರ್‌ಬಿ-1/ಡಿಸ್/74/2006-07**

**ವಾದಿ**

ಶ್ರೀ ಮಹಾಲಕ್ಷ್ಮಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ
ಲಿಮಿಟೆಡ್, ನಂ.664, 'ಆಶೀರ್ವಾದ್' 4ನೇ ಕ್ರಾಸ್,
ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು-560 086

**ವಿರುದ್ಧ ಪ್ರತಿವಾದಿಗಳು**

ಶ್ರೀಮತಿ ರಂಗಮ್ಮ ಕೋಂ ಲೇಟ್ ದೇವರಾಜು,
ನಂ.1, ಮುನೇಶ್ವರ ದೇವಸ್ಥಾನ ರಸ್ತೆ,
ಸಂಪಂಗಿರಾಮನಗರ, ಬೆಂಗಳೂರು-560 072.

ವಾದಿಯು ಪ್ರತಿವಾದಿಗಳ ವಿರುದ್ಧ ರೂ. 6,24,700-00 ಗಳನ್ನು ಶೇಕಡ 15 ರಂತೆ ಬಡ್ಡಿ ಮತ್ತು ಶೇಕಡ 2 ರಂತೆ ಸುಸ್ತಿ ಬಡ್ಡಿ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿ ದಾವೆಯನ್ನು ಹೂಡಿ ಜೊತೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 103ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಲು ಅಥವಾ ಪರಭಾರೆ ಮಾಡಲು ಉದ್ದೇಶಿಸಿರುವುದಾಗಿ ಈ ನ್ಯಾಯಾಲಯದ ಗಮನಕ್ಕೆ ತಂದ ಮೇಲೆ ಈ ನ್ಯಾಯಾಲಯವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರನ್ವಯ ಹೊರಡಿಸಿರುವ ದಿನಾಂಕ:14.7.2006ರ ನೋಟೀಸ್‌ನಲ್ಲಿ ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 6,24,700/- ಗಳನ್ನು ವಾದಿ ಸಂಘದಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:28.7.2006ರೊಳಗೆ ಅಧಿಕೃತ ಚಲನ್ ಅಥವಾ ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ನಿರ್ದೇಶಿಸಲಾಗಿತ್ತು.

ಆದರೆ ಪ್ರತಿವಾದಿಗಳು ಈ ನ್ಯಾಯಾಲಯದ ದಿನಾಂಕ:14.7.2006ರ ಆದೇಶದಲ್ಲಿ ನೀಡಿರುವ ಸೂಚನೆಯ ರೀತ್ಯ ರೂ. 6,24,700/-ಗಳನ್ನು ಈ ದಿನಾಂಕದವರೆವಿಗೂ ಸಂಘದಲ್ಲಿನ ಅಮಾನತ್ ಖಾತೆಗೆ ಜಮಾ ಮಾಡಿ ಚಲನ್/ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಈ ನ್ಯಾಯಾಲಯವು ಪ್ರತಿವಾದಿಗಳ ವಿರುದ್ಧ ಈ ನ್ಯಾಯಾಲಯದಲ್ಲಿರುವ ದಾವೆ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ದಿನಾಂಕ:17.4.2006ರಂದು ನೀಡಿರುವ ತೀರ್ಪಿಗೆ ಮುನ್ನ ಜಪ್ತಿ ಆದೇಶವನ್ನು ಸ್ಥಿರೀಕರಿಸಲು ತೀರ್ಮಾನಿಸಲಾಗಿದೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

## ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(2) ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಟಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಈ ಕೆಳಗೆ ಷೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಪ್ರತಿವಾದಿಯ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದ ಷರತ್ತಿಗೊಳಪಟ್ಟು ತೀರ್ಪಿಗೆ ಮುನ್ನ ಜಪ್ತಿ ಮಾಡಿ ನೀಡಿರುವ ನೋಟೀಸ್ ಕ್ರಮಾಂಕ:ಡಿಆರ್‌ಬಿ-1/ಡಿಸ್/74/2006-07 ದಿನಾಂಕ:14.7.2006ನ್ನು ಈ ಮೂಲಕ ಸ್ಥಿರೀಕರಿಸಿದೆ.

### ಷೆಡ್ಯೂಲ್ ಆಸ್ತಿಯ ವಿವರ

ಬೆಂಗಳೂರು ಜಿಲ್ಲೆ ಆನೇಕಲ್ ಟೌನ್‌ನಎ.ಡಿ.ಹಳ್ಳಿ ಕಾಲೋನಿಯಲ್ಲಿರುವ ಸ್ಥಿರಾಸ್ತಿ ಸಂಖ್ಯೆ: 223, ಆಸ್ತಿ ಸಂಖ್ಯೆ 2177 ಮತ್ತು ನಿವೇಶನ ಸಂಖ್ಯೆ 51 ಇದರ ಅಳತೆ 9.15x12.20 ಮೀಟರುಗಳು ಹಾಗೂ ಸದರೀ ನಿವೇಶನದಲ್ಲಿ ಕಟ್ಟಲಾಗಿರುವ 3.45x7.35 ಮೀಟರ್ ಅಳತೆಯ ಹಳೇ ಮನೆ ಮತ್ತು 3.90 x10.30 ಅಳತೆಯ ಎ.ಸಿ. ಷೀಟ್ ಮನೆ ಹಾಗೂ ಖಾಲಿ ಜಾಗ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ಮನೆ ಸಂಖ್ಯೆ 50
ಪಶ್ಚಿಮಕ್ಕೆ : ಮನೆ ಸಂಖ್ಯೆ 52
ಉತ್ತರಕ್ಕೆ : ಖಾಲಿ ನಿವೇಶನ ಸಂಖ್ಯೆ 40
ದಕ್ಷಿಣಕ್ಕೆ : 20 ಅಡಿ ಅಳತೆಯ ರಸ್ತೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: -5-2007 ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ.

ಪಿ.ಆರ್. 732

## ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

### ಪ್ರಕಟಣೆ ಸಂ:ಡಿಬಿಸಿಎಂ:ಬೆಂಗ್ರಾ:ಬಿ3:ಸಿಆರ್-3:2007-08, ದಿನಾಂಕ: 22ನೇ ಮೇ 2007

**ವಿಷಯ:** 2007-08ನೇ ಸಾಲಿನಲ್ಲಿ ಬೆಂಗಳೂರು (ಗ್ರಾ) ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವಿಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ: ಸಕಇ 205 ಬಿಎಂಎಸ್ 99, ದಿನಾಂಕ: 7.10.1999.
2. ಸರ್ಕಾರಿ ಆದೇಶ ಸಂ: ಎಸ್‌ಡಬ್ಲ್ಯೂಎಲ್ 68 ಎಸ್.ಇ.ಡಬ್ಲ್ಯು 89, ದಿನಾಂಕ: 2.11.1990.

2007-08ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಹಿಂದುಳಿದ ವರ್ಗಗಳಿಗೆ ಸೇರಿದ ವರ್ಗ-1, 2ಎ, 3ಎ ಮತ್ತು 3ಬಿ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ ಹಾಗೂ ತರಬೇತಿ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳಿಗೆ ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಹಿಂದುಳಿದ ವರ್ಗಗಳಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ:ಅಂಬೇಡ್ಕರ ವೀದಿ, ಬೆಂಗಳೂರು, ಇವರ ಕಛೇರಿಯಲ್ಲಿ ದಿನಾಂಕ: 31.8.2007 ರೊಳಗೆ ಸಲ್ಲಿಸುವುದು.

**ನಿಬಂಧನೆಗಳು:**

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿಯನ್ನು ಮುಗಿಸಿ 2(ಎರಡು) ವರ್ಷಗಳು ಮೀರಿರಬಾರದು.
2) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್ ಡಬ್ಲ್ಯೂ ಡಿ 225 ಬಿ ಸಿ ಎ 2000, ದಿನಾಂಕ: 30.3.2002ರ ಆದೇಶದ ಅನುಸಾರ ಹಿಂದುಳಿದ ವರ್ಗ-1, 2ಎ, 3ಎ ಮತ್ತು 3ಬಿ ವರ್ಗೀಕರಣಕ್ಕೆ ಒಳಪಟ್ಟಿರಬೇಕು. ಹಾಗೂ ಮೇಲ್ಕಂಡ ವರ್ಗಗಳಿಗೆ ನಿಗದಿಪಡಿಸಲಾದ ಜಾತಿ ಆದಾಯ ಪ್ರಮಾಣ ಪತ್ರಗಳೊಂದಿಗೆ ವಿವರಗಳನ್ನು ಭರ್ತಿಮಾಡಿ, ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.
3) ಪ್ರವರ್ಗ-1ನ್ನು ಹೊರತುಪಡಿಸಿ ಇತರೆ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ರೂ.15,000/-ಗಳ ವಾರ್ಷಿಕ ಆದಾಯ ಮಿತಿಯನ್ನು ನಿಗದಿಪಡಿಸಿದೆ.
4) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.
5) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳನ್ನು ಮೀರಿರಬಾರದು. ಅಂದರೆ ವರ್ಗ-1ರ ಅಭ್ಯರ್ಥಿಗಳಿಗೆ 1 ವರ್ಷ ರಿಯಾಯಿತಿ ಇದ್ದು, ಅವರುಗಳಿಗೆ ವಯಸ್ಸು 31 ವರ್ಷಗಳು ಮೀರಿರಬಾರದು.
6) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆದರೆ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರದಲ್ಲಿ ವಿವಿಧ ಹುದ್ದೆಗಳಿಗೆ ನೇಮಕಾತಿಗಾಗಿ ಅಭ್ಯರ್ಥಿಗಳಿಗೆ ರಿಯಾಯಿತಿ ನೀಡಲಾಗಿರುತ್ತದೆ.
7) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ತಿಂಗಳಿಗೆ ರೂ.1000/-ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್/ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿಕೊಡಲಾಗುವುದು.

9) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ದನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

10) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟುಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10ರ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

11) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ:ಅಂಬೇಡ್ಕರ್ ವೀದಿ, ಬೆಂಗಳೂರು ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

12) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯ ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

13) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ.ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

14) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 31.8.2007.

ಸದಸ್ಯ ಕಾರ್ಯದರ್ಶಿಗಳು ಹಾಗೂ
ಜಿಲ್ಲಾ ಅಧಿಕಾರಿಗಳು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಕಲ್ಯಾಣ ಇಲಾಖೆ, ಬೆಂಗಳೂರು (ಗ್ರಾ) ಜಿಲ್ಲೆ, ಬೆಂಗಳೂರು.

ಪಿ.ಆರ್. 744

## ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಶಿವಮೊಗ್ಗ

**ಪತ್ರಿಕಾ ಪ್ರಕಟಣೆ ಸಂ:ಬಿಸಿಎಂ:ಕಾವತ:ಸಿಆರ್-14:2007-08, ದಿನಾಂಕ: 01ನೇ ಜೂನ್ 2007**

**ವಿಷಯ:** 2007-08ನೇ ಸಾಲಿನಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಕಾನೂನು ಪದವಿಧರರನ್ನು ತರಬೇತಿಗೆ ಅರ್ಜಿ ಆಹ್ವಾನಿಸುವ ಕುರಿತು.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್:68:ಎಸ್‌ಡಬ್ಲ್ಯೂಡಿ:89 ದಿನಾಂಕ: 2.11.1990.
2. ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ:150:ಬಿಸಿಎ:94 ದಿನಾಂಕ: 17.9.94.
3. ಸರ್ಕಾರದ ಆದೇಶ ಸಂಖ್ಯೆ: ಸಕಇ:446:ಬಿಎಂಎಸ್:2005 ಬೆಂಗಳೂರು ದಿನಾಂಕ: 1.12.2005.

ಶಿವಮೊಗ್ಗ ಜಿಲ್ಲೆಯಲ್ಲಿರುವ ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಗೆ 2007-08ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ವತಿಯಿಂದ ತರಬೇತಿಯನ್ನು ನೀಡಲು ಅರ್ಜಿಯನ್ನು ಆಹ್ವಾನಿಸಲಾಗಿದೆ. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಈ ಕೆಳಕಂಡ ನಿಬಂಧನೆಗೊಳಪಟ್ಟಿರಬೇಕು.

### ನಿಬಂಧನೆಗಳು

1) ಸರ್ಕಾರಿ ಆದೇಶ ಸಂಖ್ಯೆ ಸಕಇ:225:ಬಿಸಿಎ 2000 ಬೆಂಗಳೂರು ದಿ:30.03.2002ರ ಅನ್ವಯ ವಿದ್ಯಾರ್ಥಿಗಳು ಪ್ರವರ್ಗ-1, ಪ್ರವರ್ಗ-11(ಎ), ಪ್ರವರ್ಗ-11(ಬಿ) ಪ್ರವರ್ಗ 111(ಎ) ಮತ್ತು 111(ಬಿ)ಗೆ ಸೇರಿದವರಾಗಿರಬೇಕು.

2) ಸರ್ಕಾರದ ಆದೇಶ ಸಂ.ಸಕಇ:446:ಬಿಎಂಎಸ್ 2005 ಬೆಂಗಳೂರು ದಿ.1.12.2005 ಆದೇಶದಲ್ಲಿ ಶೇಕಡವಾರು ಪ್ರವರ್ಗ-1ರಲ್ಲಿ 2 ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಉಳಿದ ವರ್ಗಗಳಲ್ಲಿ ನಿಯಮಾನುಸಾರ 8 ಅಭ್ಯರ್ಥಿಗಳು ಒಟ್ಟು 10 ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

3) ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಅಡ್ವೋಕೇಟ್ ಆಗಿ ಕಾರ್ಯನಿರ್ವಹಿಸಲು ನಿಗದಿಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ 2 ವರ್ಷ ಅವಧಿಯ ಒಳಗಿರುವವರು ಮಾತ್ರ ತರಬೇತಿ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

4) ಕಾನೂನು ತರಬೇತಿಯನ್ನು 4 ವರ್ಷಗಳ ಅವಧಿಯಾಗಿದ್ದು, ಮಾಸಿಕ ರೂ.1000-00 ಗಳ ಶಿಷ್ಯವೇತನ ನೀಡಲಾಗುವುದು.

5) ಕಾನೂನು ತರಬೇತಿಯನ್ನು ಶಿವಮೊಗ್ಗ ಜಿಲ್ಲೆಯಿಂದ 10 ಅಭ್ಯರ್ಥಿಗಳಿಗೆ ಮಾತ್ರ ನೀಡಲಾಗುವುದು. 10 ಅಭ್ಯರ್ಥಿಗಳಲ್ಲಿ ಶೇಕಡ 33.33 ರಷ್ಟು ಮಹಿಳಾ ಅಭ್ಯರ್ಥಿಗಳನ್ನು ಸಹ ಆಯ್ಕೆ ಮಾಡಲಾಗುವುದು. 10 ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ವರ್ಗವಾರು ವಿವರ ಕೆಳಕಂಡಂತಿದೆ.

| | | | |
|---|---|---|---|
| 1) | ಪ್ರವರ್ಗ 1 | 15 ಶೇ | 2 ಅಭ್ಯರ್ಥಿಗಳು |
| 2) | ಪ್ರವರ್ಗ 11 (ಎ) | 53 ಶೇ | 5 ಅಭ್ಯರ್ಥಿಗಳು |
| 3) | ಪ್ರವರ್ಗ 111 (ಎ) | 15 ಶೇ | 1 ಅಭ್ಯರ್ಥಿಗಳು |
| 4) | ಪ್ರವರ್ಗ 111 (ಬಿ) | 17 ಶೇ | 2 ಅಭ್ಯರ್ಥಿಗಳು |
| | | **ಒಟ್ಟು** | **10 ಅಭ್ಯರ್ಥಿಗಳು** |

6) ಅಭ್ಯರ್ಥಿಯ ಗರಿಷ್ಠ ವಯೋಮಿತಿಯು 30 ವರ್ಷದೊಳಗಿರಬೇಕು. ಹಾಗೂ ಪ್ರವರ್ಗ-1ರ ಅಭ್ಯರ್ಥಿಗಳಿಗೆ ಒಂದು ವರ್ಷ ರಿಯಾಯಿತಿ ಇರುತ್ತದೆ.

7) ತರಬೇತಿ ಅವಧಿಯ ಮಧ್ಯಭಾಗದಲ್ಲಿ ತರಬೇತಿ ಗೈರುಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯ ವೇತದ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗುವುದು.
8) ಪ್ರವರ್ಗ-1 ನ್ನು ಹೊರತುಪಡಿಸಿ ಇತರೆ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 15,000-00 ಗಳ ವಾರ್ಷಿಕ ಆದಾಯದ ಮಿತಿಯನ್ನು ನಿಗದಿಪಡಿಸಲಾಗಿದೆ.
9) ಅಭ್ಯರ್ಥಿಯು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿರಬೇಕು.
10) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಸಮಿತಿಯ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ ಕನಿಷ್ಟ 20 ವರ್ಷಗಳ ವೃತ್ತಿಯನ್ನು ಅನುಭವ ವಕೀಲರ ಅಧೀನದಲ್ಲಿ ತರಬೇತಿ ಪಡೆಯುವುದು.
11) ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ:16.7.2007
12) ಅಪೂರ್ಣವಾದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಯನ್ನು ಯಾವುದೇ ಮುನ್ಸೂಚನೆ ಇಲ್ಲದೇ ತಿರಸ್ಕರಿಸಲಾಗುವುದು.
13) ಆಯ್ಕೆಯು ಅನುದಾನ ಲಭ್ಯತೆಯ ಷರತ್ತಿಗೊಳಪಟ್ಟಿರುತ್ತದೆ.

ಹೆಚ್ಚಿನ ವಿವರಗಳಿಗೆ ಹಾಗೂ ಅರ್ಜಿ ನಮೂನೆಯನ್ನು ಜಿಲ್ಲಾ ಅಧಿಕಾರಿಗಳ ಕಛೇರಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ರವೀಂದ್ರನಗರ, 100 ಅಡ್ಡರಸ್ತೆ, ಶಿವಮೊಗ್ಗ ಜಿಲ್ಲೆ, ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಶಿವಮೊಗ್ಗ.

## ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಶಿವಮೊಗ್ಗ

### ಪತ್ರಿಕಾ ಪ್ರಕಟಣೆ

**ಸಂ:ಬಿಸಿಎಂ:ಅಕಾಪತ:ಸಿಆರ್-15:2007-08, ದಿನಾಂಕ: 01ನೇ ಜೂನ್ 2007**

**ವಿಷಯ:** 2007-08ನೇ ಸಾಲಿಗೆ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ ತರಬೇತಿಗಾಗಿ ಅರ್ಜಿಯನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ: ಸಕಇ 149 ಬಿಇಟಿ 99 ದಿನಾಂಕ: 2.9.99.
2. ಸಕಇ 205:ಬಿಎಂಎಸ್ 99 ದಿನಾಂಕ: 9.10.99.
3. ಎಸ್‌ಡಬ್ಲ್ಯುಎಲ್ 60:ಎಸ್‌ಎಡಬ್ಲ್ಯೂ:12: ದಿನಾಂಕ: 2.11.99.

ಶಿವಮೊಗ್ಗ ಜಿಲ್ಲೆಯಲ್ಲಿರುವ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ 2007-08ನೇ ಸಾಲಿನಿಂದ ನಾಲ್ಕು ವರ್ಷಗಳ ಅವಧಿಯವರೆಗೆ ಈ ಇಲಾಖಾ ವತಿಯಿಂದ ತರಬೇತಿಯನ್ನು ನೀಡಲು ಅರ್ಜಿಯನ್ನು ಆಹ್ವಾನಿಸಲಾಗಿದೆ. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಈ ಕೆಳಕಂಡ ನಿಬಂಧನೆಗೊಳಪಟ್ಟಿರಬೇಕು.

**ನಿಬಂಧನೆಗಳು**

1) ಅಭ್ಯರ್ಥಿಯು ಮತೀಯ ಅಲ್ಪಸಂಖ್ಯಾತರರಾಗಿರಬೇಕು. (ಮುಸ್ಲಿಂ, ಜೈನ್, ಕ್ರಿಶ್ಚಿಯನ್, ಸಿಖ್, ಬೌದ್ಧ, ಪಾರ್ಸಿ ಹಾಗೂ ಆಂಗ್ಲೋ ಇಂಡಿಯನ್)
2) ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ್ಕೆ ಅಭ್ಯರ್ಥಿಯು ಅಡ್ವೋಕೇಟ್ ಆಗಿ ಕಾರ್ಯ ನಿರ್ವಹಿಸಲು ನಿಗದಿಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ 2 ವರ್ಷಗಳ ಅವಧಿಯೊಳಗೆ ಇರುವವರು ಮಾತ್ರ ಅರ್ಜಿಯನ್ನು ಸಲ್ಲಿಸಬಹುದು.
3) ಕಾನೂನು ತರಬೇತಿಯು 4 ವರ್ಷಗಳ ಅವಧಿಯಾಗಿದ್ದು, ಮಾಸಿಕ ರೂ.1000-00 ಗಳನ್ನು ಶಿಷ್ಯವೇತನ ನೀಡಲಾಗುವುದು.
4) ಅಭ್ಯರ್ಥಿಯ ಗರಿಷ್ಠ ವಯೋಮಿತಿ 30 ವರ್ಷದೊಳಗಿರಬೇಕು.
5) ತರಬೇತಿಯ ಅವಧಿಯ ಮಧ್ಯಭಾಗದಲ್ಲಿ ತರಬೇತಿಗೆ ಗೈರುಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯವೇತನ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗುವುದು.
6) ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ: 16.7.2007
7) ಅಪೂರ್ಣವಾದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಯನ್ನು ಯಾವುದೇ ಮುನ್ಸೂಚಿ ಇಲ್ಲದೇ ತಿರಸ್ಕರಿಸಲಾಗುವುದು.
8) ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯವು ರೂ.15,000-00ಕ್ಕೆ ಮೀರಿರಬಾರದು. ಪ್ರವರ್ಗ-1 ರಡಿಯಲ್ಲಿ ಬರುವ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.
9) ಅಭ್ಯರ್ಥಿಯು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿರಬೇಕು.
10) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಸಮಿತಿಯ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವೃತ್ತಿಯಲ್ಲಿ ಅನುಭವ ವಕೀಲರ ಅಧೀನದಲ್ಲಿ ತರಬೇತಿ ಪಡೆಯುವುದು.
11) ಆಯ್ಕೆಯು ಅನುದಾನ ಲಭ್ಯತೆ ಮೇಲೆ ಅವಲಂಬಿಸಿರುವುದರಿಂದ ಷರತ್ತಿಗೊಳಪಟ್ಟಿರುತ್ತದೆ.

ಹೆಚ್ಚಿನ ವಿವರಗಳಿಗೆ ಹಾಗೂ ಅರ್ಜಿ ನಮೂನೆಯನ್ನು ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ರವೀಂದ್ರ ನಗರ, 100 ಅಡಿರಸ್ತೆ, ಶಿವಮೊಗ್ಗ ಜಿಲ್ಲಾ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ,
ಶಿವಮೊಗ್ಗ.

ಪಿ.ಆರ್. 761